KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೧೦ (ಭಾದ್ರಪದ ೪, ಶಕ ವರ್ಷ ೧೯೩೨) | ನಂ. ೯೪೬ |
|---|---|---|

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ:ನಅಇ 19 ಎಂಎಲ್ಆರ್ 2009, ಬೆಂಗಳೂರು, ದಿನಾಂಕ : 25ನೇ ಆಗಸ್ಟ್, 2010**

ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಅಧಿನಿಯಮದ 1976ರ (1977 ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದೊಂದಿಗೆ ಓದಿಕೊಂಡ 503 ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಗತ್ಯಪಡಿಸಿರುವಂತೆ ತುಮಕೂರು ನಗರಸಭೆಯನ್ನು ತುಮಕೂರು ಮಹಾನಗರಪಾಲಿಕೆ ಎಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ ಅಧಿಸೂಚನೆ ಸಂಖ್ಯೆ:ನಅಇ 19 ಎಂಎಲ್ಆರ್ 2009, ಬೆಂಗಳೂರು, ದಿನಾಂಕ : 25.01.2010 ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–4ಎ ರಲ್ಲಿ ದಿನಾಂಕ 25.01.2010ರಂದು ಪ್ರಕಟಿಸಿ ಇದರಿಂದ ಭಾದಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ 30 ದಿನದೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿರುವುದರಿಂದ,

ಸದರಿ ರಾಜ್ಯ ಪತ್ರವನ್ನು ದಿನಾಂಕ 25.01.2010ರಂದು ಸಾರ್ವಜನಿಕರಿಗೆ ಲಭ್ಯವಾಗಿರುವಂತೆ ಮಾಡಿರುವುದರಿಂದ,

ನಿಗಧಿತ ಅವಧಿಯಲ್ಲಿ ಆಕ್ಷೇಪಣೆಗಳು ಹಾಗೂ ಸಲಹೆಗಳು ಸ್ವೀಕೃತವಾಗಿದ್ದು, ಅವುಗಳನ್ನು ಕೂಲಂಕುಷವಾಗಿ ಪರಿಶೀಲಿಸಿರುವುದರಿಂದ,

ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಅಧಿನಿಯಮದ 1976ರ (1977 ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದೊಂದಿಗೆ ಓದಿಕೊಂಡ 503 ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರದನ್ವಯ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು,

1. ಷೆಡ್ಯೂಲ್ 'ಎ' ನಲ್ಲಿ ನಿರ್ದಿಷ್ಟಪಡಿಸಿರುವ ಪ್ರದೇಶದ ಜನಸಂಖ್ಯೆಯು ಮೂರು ಲಕ್ಷಕ್ಕಿಂತ ಕಡಿಮೆ ಇಲ್ಲದಿರುವುದು;
2. ಅಂಥ ಪ್ರದೇಶದಲ್ಲಿ ಜನಸಂಖ್ಯೆ ಜನಸಾಂದ್ರತೆಯು ಆ ಪ್ರದೇಶದ ಒಂದು ಚದುರ ಕಿಲೋಮೀಟರ್ ವಿಸ್ತೀರ್ಣಕ್ಕೆ ಮೂರು ಸಾವಿರಕ್ಕಿಂತ ಕಡಿಮೆಯಿಲ್ಲದಿರುವುದು;
3. ಕಳೆದ ಹಿಂದಿನ ಜನಗಣತಿಯ ವರ್ಷದಲ್ಲಿ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಅಂತಹ ಪ್ರದೇಶಗಳಿಂದ ಸ್ಥಳೀಯ ಆಡಳಿತಕ್ಕೆ ದೊರಕುವ ರಾಜಸ್ವವು ಪ್ರತಿವರ್ಷ 6.00 ಕೋಟಿ ರೂಪಾಯಿಗಳಿಗಿಂತ ಕಡಿಮೆಯಿಲ್ಲದಿರುವುದು ಅಥವಾ ವಾರ್ಷಿಕ ತಲಾ ಆದಾಯ ರೂಪಾಯಿ ಇನ್ನೂರರಂತೆ ಲೆಕ್ಕ ಹಾಕಲಾದ ಮೊತ್ತ ಇವುಗಳಲ್ಲಿ ಯಾವುದು ಗರಿಷ್ಠವೋ ಆ ಮೊತ್ತ;

4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗ ಪ್ರಮಾಣದ ಶೇಕಡಾ ಐವತ್ತಕ್ಕಿಂತ ಕಡಿಮೆ ಇಲ್ಲದಿರುವುದು.

ಗಮನಿಸಿ ಷೆಡ್ಯೂಲ್–ಎ ಯಲ್ಲಿ ನಿರ್ಧಿಷ್ಟಪಡಿಸಿರುವ ಪ್ರದೇಶವನ್ನು ಷೆಡ್ಯೂಲ್–ಬಿ ನಲ್ಲಿ ನಿರ್ಧಿಷ್ಟ ಪಡಿಸಲಾಗಿರುವ ಪರಿಮಿತಿಗಳನ್ನೊಳಗೊಂಡಂತೆ ತುಮಕೂರು ನಗರಸಭೆಯನ್ನು **ತುಮಕೂರು ಮಹಾನಗರಪಾಲಿಕೆ** ಎಂದು ಪರಿವರ್ತನೆಯಾಗುವ ಪ್ರದೇಶವೆಂದು ನಿರ್ಧಿಷ್ಟಪಡಿಸಲು ಈ ಮೂಲಕ ಉದ್ಘೋಷಿಸಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್.ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ – ಎ**

**1. ತುಮಕೂರು ನಗರ**

**2. ಗ್ರಾಮಗಳು**

| | | | | | |
|---|---|---|---|---|---|
| 1. | ದಿಬ್ಬೂರು. | 9. | ತುಮಕೂರು ಕಸಬ | 17. | ಉಪ್ಪಾರಹಳ್ಳಿ |
| 2. | ತುಮಕೂರು ಎ.ಕೆ. | 10. | ದೇವರಾಯಪಟ್ಟಣ | 18. | ವೀರಸಾಗರ |
| 3. | ಹೊನ್ನೇನಹಳ್ಳಿ | 11. | ಬಟವಾಡಿ | 19. | ಮರ್ಳೇಕೋಟೆ |
| 4. | ಮರಳೇನಹಳ್ಳಿ | 12. | ಕ್ಯಾತ್ಸಂದ್ರ | 20. | ಭೀಮಸಂದ್ರ |
| 5. | ಲಿಂಗಾಪುರ | 13. | ಬಡ್ಡಿಹಳ್ಳಿ | 21. | ಚನ್ನದಿಣ್ಣೆ |
| 6. | ರಾಮಪುರ | 14. | ಶೆಟ್ಟಿಹಳ್ಳಿ | 22. | ಗಂಗಸಂದ್ರ |
| 7. | ಅಂತರಸನಹಳ್ಳಿ | 15. | ಗೆದ್ದಲಹಳ್ಳಿ | | |
| 8. | ಸತ್ಯಮಂಗಲ | 16. | ಮರಳೂರು | | |

**ಅನುಸೂಚಿ – ಬಿ**

ಉದ್ದೇಶಿತ ತುಮಕೂರು ಮಹಾನಗರಪಾಲಿಕೆಯ ಎಲ್ಲೆಯು ತುಮಕೂರಿನಿಂದ ನೈರುತ್ಯ ಮಾರ್ಗವಾಗಿ ಹೊರಟು ಗಂಗಸಂದ್ರ ಮುಟ್ಟಿ ಮುಂದೆ ಉತ್ತರ ದಿಕ್ಕಿನಲ್ಲಿ ಹೊರಟು ಪಶ್ಚಿಮದ ಕಡೆ ಇರುವ ಮಳೆಕೋಟೆ, ಭೀಮಸಂದ್ರ, ದಿಬ್ಬೂರು ಪಶ್ಚಿಮದ ಕಡೆ ಇರುವ ಮರಳೇನಹಳ್ಳಿ ಸೇರಿ ಈಶಾನ್ಯದ ಕಡೆ ಇರುವ ಮರಳೇನಹಳ್ಳಿ ಗಡಿ ಮುಟ್ಟಿ ಅಲ್ಲಿಂದ ಪೂರ್ವಾಭಿಮುಖವಾಗಿ ಹಾಗೂ ಉತ್ತರದಲ್ಲಿರುವ ಲಿಂಗಾಪುರ ಮತ್ತು ಅಂತರಹಳ್ಳಿ ಗಡಿ ಮುಟ್ಟಿ ವಾಯುವ್ಯ ಕಡೆ ಇರುವ ಸತ್ಯಮಂಗಲ ಸೇರಿ ಅಲ್ಲಿಂದ ವಾಯುವ್ಯದ ಕಡೆ ಇರುವ ದೇವರಾಯನಪಟ್ಟಣ ಮತ್ತು ಕ್ಯಾತ್ಸಂದ್ರ ಮತ್ತು ಬಡ್ಡಿಹಳ್ಳಿ ಗಡಿ ತಲುಪಿ ನೈರುತ್ಯ ಭಾಗದಲ್ಲಿರುವ ಬಡ್ಡಿಹಳ್ಳಿ ಗಡಿ ಅಲ್ಲಿಂದ ನೈರುತ್ಯಾಭಿಮುಖವಾಗಿ ಹೊರಟು ಶೆಟ್ಟಿಹಳ್ಳಿ ಗಡಿಯನ್ನು ತಲುಪಿ ಅಲ್ಲಿಂದ ಗೆದ್ದಲಹಳ್ಳಿ ಆಗ್ನೇಯ ಸೇರಿ ಅಲ್ಲಿಂದ ಪಶ್ಚಿಮಾಭಿಮುಖವಾಗಿ ಹೊರಟು ದಕ್ಷಿಣದ ಕಡೆಯ ಗೆದ್ದಲಹಳ್ಳಿ, ಮರಳೂರು ಮತ್ತು ಮೆಳೇಕೋಟೆ ಗಡಿಗಳನ್ನು ಮುಟ್ಟಿ ಮೆಳೇಕೋಟೆ ನೈರುತ್ಯ ಭಾಗ ಸೇರಿ ತುಮಕೂರು ಮಹಾನಗರಪಾಲಿಕೆಯ ಗಡಿ ಪ್ರಾರಂಭವನ್ನು ಸೇರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್.ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## *URBAN DEVELOPMENT SECRETARIAT*
## *NOTIFICATION*

***No. UDD 19 MLR 2009, Bangalore, Dated : 25th August, 2010***

Whereas the draft of the notification specifying area of TUMKUR City Municipal Council to further specify the said City Municipal Council are be called TUMKUR City Corporation was published in exercise of the power conferred by Section 3 read with Section 503 of Karnataka Municipal Corporation Act 1976 (Karnataka Act 14 of 1977) in notification No.UDD 19 MLR 2009, dated 25.01.2010 in Part-IV-A of the Karnataka Extraordinary Gazetted dated 25.01.2010 inviting objections to the said proposals from all persons likely to be affected thereby on or before 30 days from the date of publication of the said notification.

And whereas the Gazette was made available to the public on 25th January, 2010.

And whereas, objections and suggestions were received and the same have been duly examined.

Now, therefore, in exercise of the powers conferred by Section 3 read with Section 503 of the Karnataka Municipal Corporation Act 1976 (Karnataka Act 14 of 1977), Governor of Karnataka hereby specified the TUMKUR City Municipal Council specified in Schedule "A" the limits of which are specified in Schedule "B" and to further specify it to be called ***TUMKUR City Corporation*** having regard to :-

i) The population of the area specified in Schedule-A is being not less than three lakhs;

ii) The density of population in such area being not less than three thousand inhabitants to one square kilometer of area;

iii) The revenue generated for local administration from such area from tax and non-tax sources in the year of the last preceding census being not less than rupees Rs.6.00 Crores per annum; or a sum calculated at the rate of Rs.200 per capita per annum, whichever is higher;

iv) The percentage of employment in non-agricultural activities being not less than fifty percent of the total employment.

By order and in the name of the Governor of Karnataka,

***C.R.RAVINDRA***

Under Secretary to Government

Urban Development Department

**SCHEDULE - A**

1. ***Tumkur City***
2. ***Villages***

| | | | | | |
|---|---|---|---|---|---|
| 1. | Dibbur | 9. | Tumkur Kasaba | 17. | Upparahalli |
| 2. | Tumkur A.K | 10. | Devarayapatna | 18. | Veerasagara |
| 3. | Honnehalli | 11. | Batawade | 19. | Melekote |
| 4. | Maralenahalli | 12. | Kyathasandra | 20. | Bheemasandra |
| 5. | Rangapura | 13. | Baddihalli | 21. | Channadinne |
| 6. | Lingapura | 14. | Sattihalli | 22. | Gangasandra |
| 7. | Antharasanahalli | 15. | Gedalahalli | | |
| 8. | Sathymangala | 16. | Maralur | | |

**SCHEDULE - B**

The boundary of the City Corporation of Tumkur starts from the south-west corner of Gangasandra village and turns towards North all along the western boundary of Melekote, Bheemasandra, till it meets the South-East corner. It turns towards North and runs along with the Western boundaries of Bheemasandra, Dibbur and Western boundary of Honnenahalli, Marelenahalli till it meets the North-west corner of Marelenahalli village and from where it takes a turn towards south and turns along with the Eastern boundary of Marelenahalli village till it meets the South-East corner of Marelenahalli village from where it turns towards east and runs along the Northern boundaries of lingapura and Antharasanahalli till it meets North-West corner Sathyamangala from where the boundary runs along with Northern and Western boundary Sathyamangala till it meets South and North along the Eastern boungaries of Devarapatna and kyathasandra till it reaches the South-East corner of Kyathasandra village at this point the boundry takes a turn towards South-West and runs along with the Southern boundaries and Kyathasandra and baddihalli till it reaches South-West corner of Baddihalli from where it turns towards south-West and runs along the Southern boundries of settihalli till it reaches the South-West corner of Gadlahalli at this point it turns towards west and runs along the Southern boundaries of Gadilahalli, Maraloor and Malokote village till it reaches the South-West corner Malakore village where the boundaries lines started.

By order and in the name of the Governor of Karnataka,
***C.R.RAVINDRA***
Under Secretary to Government
Urban Development Department

**P. R. 946**

# ವಿಶೇಷ ಪತ್ರಿಕೆ

| ಭಾಗ - ***IV-A*** | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೧೦ (ಭಾದ್ರಪದ ೪, ಶಕ ವರ್ಷ ೧೯೩೨) | ನಂ. ೯೪೭ |
|---|---|---|

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಎ 2009, ಬೆಂಗಳೂರು, ದಿನಾಂಕ: 24ನೇ ಆಗಸ್ಟ್, 2010**

ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ

ಅಧಿಕಾರಗಳನ್ನು ಚಲಾಯಿಸಿ, ರಚಿಸಲು ಉದ್ದೇಶಿಸಿದ, ಕರ್ನಾಟಕ ಸಿವಿಲ್ ಸೇವಾ ನಿಯಮಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವ ಈ ಮುಂದಿನ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳು ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಮೇಲೆ ನಿರ್ದಿಷ್ಟಪಡಿಸಿದ ಅವಧಿ ಮುಕ್ತಾಯವಾಗುವುದಕ್ಕೆ ಮುಂಚೆ ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ, ವಿಧಾನ ಸೌಧ, ಬೆಂಗಳೂರು–560001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–**

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳ ( ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 8ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವೆಗಳ ನಿಯಮಗಳ (ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 8ನೇ ನಿಯಮದಲ್ಲಿ, (10)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(11)" ಸೇವೆಗಳ ವರ್ಗ ಅಥವಾ ಸಮೂಹ ಎಂದರೆ ಕರ್ನಾಟಕ ಸಿವಿಲ್ ಸೇವೆಗಳ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957"ರ 5ನೇ ನಿಯಮದಲ್ಲಿ ವರ್ಗೀಕರಿಸಲಾದಂಥ ಸಿವಿಲ್ ಸೇವೆಗಳ ವರ್ಗ ಅಥವಾ ಸಮೂಹ

**3. 32ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 32ನೇ ನಿಯಮದಲ್ಲಿ, ಟಿಪ್ಪಣಿ 3ಕ್ಕೆ ಬದಲಾಗಿ ಈ ಮುಂದಿನದನ್ನು 2008ರ ಆಗಸ್ಟ್ ಮೊದಲ ದಿನದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"ಟಿಪ್ಪಣಿ 3:– ಕೆಳಗಿನ ಕೋಷ್ಟಕದ ಅಂಕಣ (1)ರಲ್ಲಿ ನಿರ್ದಿಷ್ಟಪಡಿಸಿದ ಪ್ರಭಾರಿ ವ್ಯವಸ್ಥೆಗಳನ್ನು ಮಾಡುವ ಸಕ್ಷಮ ಪ್ರಾಧಿಕಾರಿಯು, ಇದರ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳ ವರ್ಗ ಅಥವಾ ಸಮೂಹದ ಹುದ್ದೆಗಳನ್ನು ಹೊಂದಿರುವ ಅಧೀನ ಸರ್ಕಾರಿ ನೌಕರರ ಸಂಬಂಧದಲ್ಲಿ ಇದರಲ್ಲಿ ಸೂಚಿಸಿದ ಗರಿಷ್ಠ ಅವಧಿಗೆ ಖಾಲಿ ಹುದ್ದೆಗಳ ಸಂಬಂಧ ಪ್ರಭಾರಿ ವ್ಯವಸ್ಥೆಗಳನ್ನು ಮಾಡಬಹುದು;

**ಕೋಷ್ಟಕ**

| **ಪ್ರಭಾರಿ ವ್ಯವಸ್ಥೆಯನ್ನು ಮಾಡುವ ಸಕ್ಷಮ ಪ್ರಾಧಿಕಾರಿ** | **ಸೇವೆಗಳ ವರ್ಗ ಮತ್ತು ಸಮೂಹಕ್ಕೆ ಸೇರಿದ ಹುದ್ದೆಗಳು** | | |
|---|---|---|---|
| 1 | 2 | | |
| | 'ಎ' ಸಮೂಹದ ಸೇವೆಗಳು | 'ಬಿ' ಸಮೂಹದ ಸೇವೆಗಳು | ಸಿ ಮತ್ತು ಡಿ ಸಮೂಹದ ಸೇವೆಗಳು |
| ಇಲಾಖಾ ಮುಖ್ಯಸ್ಥರು | 4 ತಿಂಗಳುಗಳು | 6 ತಿಂಗಳುಗಳು | ಪೂರ್ಣ ಅಧಿಕಾರಗಳು |
| ವಿಭಾಗೀಯ ಮಟ್ಟದ ಅಧಿಕಾರಿಗಳು | 3 ತಿಂಗಳುಗಳು | 4 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಜಿಲ್ಲಾ ಮಟ್ಟದ ಅಧಿಕಾರಿಗಳು | 2 ತಿಂಗಳುಗಳು | 3 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಉಪ ವಿಭಾಗೀಯ ಅಧಿಕಾರಿಗಳು | – | 2 ತಿಂಗಳುಗಳು | ಪೂರ್ಣ ಅಧಿಕಾರಗಳು |
| ತಾಲ್ಲೂಕು ಮಟ್ಟದ ಅಧಿಕಾರಿಗಳು | – | – | ಪೂರ್ಣ ಅಧಿಕಾರಗಳು" |

**4. 68ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 68ನೇ ನಿಯಮದಲ್ಲಿ

(1) "ಹುದ್ದೆಯ ವೇತನದ (ಹುದ್ದೆಗಳ ಕನಿಷ್ಠ ವೇತನ)" ಶೇಕಡ ಐದರಷ್ಟನ್ನು ಮೀರದ ಎಂಬ ಪದಗಳ ಬದಲಾಗಿ, "ರೂ 1000/–ದ ಗರಿಷ್ಠಕ್ಕೆ ಒಳಪಟ್ಟು ಹೊಂದಿರುವ ಹುದ್ದೆಯ ಶ್ರೇಣಿಯ ಕನಿಷ್ಠ ಶೇಕಡ ಐದರ ದರದಲ್ಲಿ" ಎಂಬ ಪದಗಳು, ಪದಾವಳಿಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲ ದಿನದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(2)ಟಿಪ್ಪಣಿ 8ಕ್ಕೆ ಬದಲಾಗಿ, ಈ ಮುಂದಿನ ಟಿಪ್ಪಣಿಯನ್ನು 2008ರ ಆಗಸ್ಟ್ ಮೊದಲ ದಿನದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**"ಟಿಪ್ಪಣಿ 8:–** ಕೆಳಗಿನ ಕೋಷ್ಟಕದ ಅಂಕಣ (1)ರಲ್ಲಿ ನಿರ್ದಿಷ್ಟಪಡಿಸಿದ ಪ್ರಭಾರಿ ವ್ಯವಸ್ಥೆಗಳನ್ನು ಮಾಡುವ ಸಕ್ಷಮ ಪ್ರಾಧಿಕಾರಿಯು, ಇದರ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿದ ದರ್ಜೆಯ ಹುದ್ದೆಗಳ ವರ್ಗ ಅಥವಾ ಸಮೂಹದ ಹುದ್ದೆಗಳನ್ನು ಹೊಂದಿರುವ ಅಧೀನ ಸರ್ಕಾರಿ ನೌಕರರ ಸಂಬಂಧದಲ್ಲಿ ಇದರಲ್ಲಿ ಸೂಚಿಸಿದ ಗರಿಷ್ಠ ಅವಧಿಗೆ ಖಾಲಿ ಹುದ್ದೆಗಳ ಸಂಬಂಧ ಪ್ರಭಾರಿ ವ್ಯವಸ್ಥೆಗಳನ್ನು ಮಾಡಬಹುದು.

**ಕೋಷ್ಟಕ**

| **ಪ್ರಭಾರಿ ವ್ಯವಸ್ಥೆಗಳನ್ನು ಮಾಡುವ ಸಕ್ಷಮ ಪ್ರಾಧಿಕಾರಿ** | **ಸೇವೆಗಳ ವರ್ಗ ಅಥವಾ ಸಮೂಹ** | | |
|---|---|---|---|
| 1 | 2 | | |
| | 'ಎ' ಸಮೂಹದ ಸೇವೆಗಳು | 'ಬಿ' ಸಮೂಹದ ಸೇವೆಗಳು | ಸಿ ಮತ್ತು ಡಿ ಸಮೂಹದ ಸೇವೆಗಳು |
| ಇಲಾಖಾ ಮುಖ್ಯಸ್ಥರು | 4 ತಿಂಗಳುಗಳು | 6 ತಿಂಗಳುಗಳು | ಪೂರ್ಣ ಅಧಿಕಾರಗಳು |
| ವಿಭಾಗೀಯ ಮಟ್ಟದ ಅಧಿಕಾರಿಗಳು | 3 ತಿಂಗಳುಗಳು | 4 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಜಿಲ್ಲಾ ಮಟ್ಟದ ಅಧಿಕಾರಿಗಳು | 2 ತಿಂಗಳುಗಳು | 3 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಉಪ ವಿಭಾಗೀಯ ಅಧಿಕಾರಿಗಳು | – | 2 ತಿಂಗಳುಗಳು | ಪೂರ್ಣ ಅಧಿಕಾರಗಳು |
| ತಾಲ್ಲೂಕು ಮಟ್ಟದ ಅಧಿಕಾರಿಗಳು | – | – | ಪೂರ್ಣ ಅಧಿಕಾರಗಳು" |

**5. 192ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 192ನೇ ನಿಯಮದಲ್ಲಿ, ಟಿಪ್ಪಣಿಗಳು 1 ರಿಂದ 6ನ್ನು ಹೊರತುಪಡಿಸಿ (ಡಿ) ಖಂಡಕ್ಕೆ ಬದಲಾಗಿ, ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(ಡಿ) ಕೆಳಗಿನ ಕೋಷ್ಟಕದ ಅಂಕಣ (1)ರಲ್ಲಿ ನಿರ್ದಿಷ್ಟಪಡಿಸಿದ ವಿಶೇಷ ಅಸಮರ್ಥತೆ ರಜೆಯ ಹೊರತಾದ ಇತರ ರಜೆಯನ್ನು ಮಂಜೂರು ಮಾಡುವ ಸಕ್ಷಮ ಪ್ರಾಧಿಕಾರಿಯು ಇದರ ಅಂಕಣ(2)ರಲ್ಲಿ ನಿರ್ದಿಷ್ಟಪಡಿಸಿದ ಸೇವೆಗಳ ವರ್ಗ ಅಥವಾ ಸಮೂಹದಲ್ಲಿನ ಹುದ್ದೆಗಳನ್ನು ಹೊಂದಿರುವ ಅಧೀನ ಸರ್ಕಾರಿ ನೌಕರರ ಸಂಬಂಧದಲ್ಲಿ ಗರಿಷ್ಠ ಅವಧಿಗೆ ಇದೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ವಿಶೇಷ ಅಸಮರ್ಥತೆ ರಜೆಯ ಹೊರತಾದ ಇತರ ರಜೆಯನ್ನು ಮಂಜೂರು ಮಾಡಬಹುದು.

**ಕೋಷ್ಟಕ**

| **ವಿಶೇಷ ಅಸಮರ್ಥತೆ ರಜೆಯ ಹೊರತಾದ ಇತರ ರಜೆಯನ್ನು ಮಂಜೂರು ಮಾಡುವ ಸಕ್ಷಮ ಪ್ರಾಧಿಕಾರಿ** | **ಸೇವೆಗಳ ವರ್ಗ ಅಥವಾ ಸಮೂಹ** | | |
|---|---|---|---|
| 1 | 2 | | |
| | 'ಎ' ಸಮೂಹದ ಸೇವೆಗಳು | 'ಬಿ' ಸಮೂಹದ ಸೇವೆಗಳು | 'ಸಿ' ಮತ್ತು 'ಡಿ' ಸಮೂಹದ ಸೇವೆಗಳು |
| ಇಲಾಖಾ ಮುಖ್ಯಸ್ಥರು | 4 ತಿಂಗಳುಗಳು | 6 ತಿಂಗಳುಗಳು | ಪೂರ್ಣ ಅಧಿಕಾರಗಳು |
| ವಿಭಾಗೀಯ ಮಟ್ಟದ ಅಧಿಕಾರಿಗಳು | 3 ತಿಂಗಳುಗಳು | 4 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಜಿಲ್ಲಾ ಮಟ್ಟದ ಅಧಿಕಾರಿಗಳು | 2 ತಿಂಗಳುಗಳು | 3 ತಿಂಗಳುಗಳು | ಪೂರ್ಣ ಅಧಿಕಾರಗಳು |
| ಉಪ ವಿಭಾಗೀಯ ಅಧಿಕಾರಿಗಳು | – | 2 ತಿಂಗಳುಗಳು | ಪೂರ್ಣ ಅಧಿಕಾರಗಳು |
| ತಾಲ್ಲೂಕು ಮಟ್ಟದ ಅಧಿಕಾರಿಗಳು | – | – | ಪೂರ್ಣ ಅಧಿಕಾರಗಳು" |

**6. 210ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 210ನೇ ನಿಯಮದಲ್ಲಿ "ರೂ.ಗಳು 1,055/–" ಎಂಬ ಪದಾವಳಿಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.ಗಳು 2,250/–" ಎಂಬ ಪದಾವಳಿಗಳು ಮತ್ತು ಅಂಕಿಗಳನ್ನು, 2008ರ ಆಗಸ್ಟ್, ಮೊದಲ ದಿನದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**7. 222ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 222ನೇ ನಿಯಮದಲ್ಲಿ,–

(i) ಸದರಿ ನಿಯಮದ ಪರಂತುಕದಲ್ಲಿ ಕಂಡುಬರುವ "15 ವರ್ಷಗಳು" ಎಂಬ ಅಂಕಿಗಳು ಮತ್ತು ಪದಗಳಿಗೆ ಬದಲಾಗಿ "10 ವರ್ಷಗಳು" ಎಂಬ ಅಂಕಿಗಳು ಮತ್ತು ಪದಗಳನ್ನು 2003ನೇ ಸೆಪ್ಟೆಂಬರ್ ಮೊದಲ ದಿನದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(ii) ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತು ಪರಂತು, 01.09.2003 ಮತ್ತು 8.9.2006ರ ಅವಧಿಯಲ್ಲಿ ನಿವೃತ್ತರಾದ ಸರ್ಕಾರಿ ನೌಕರರು 22ನೇ ಅಕ್ಟೋಬರ್, 2007ರ ವರೆಗೆ ಕೇವಲ ಕಾಲ್ಪನಿಕ ನಿರ್ಧರಣೆಗೆ ಅರ್ಹರಾಗಿರತಕ್ಕದ್ದು ಆದರೆ, ಯಾವುದೇ ಬಾಕಿಗಳಿಗೆ ಅರ್ಹರಾಗಿರತಕ್ಕದ್ದಲ್ಲ."

**8. 291ಜಿ ಹೊಸ ನಿಯಮದ ಸೇರ್ಪಡೆ.-** ಸದರಿ ನಿಯಮಗಳ 291-ಎಫ್ ನಿಯಮದ ತರುವಾಯ ಈ ಮುಂದಿನ ಹೊಸ ನಿಯಮವನ್ನು 2003ರ ಸೆಪ್ಟೆಂಬರ್, ಮೊದಲ ದಿನದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"291(ಜಿ):- 2003ರ ಸೆಪ್ಟೆಂಬರ್, 1 ರಂದು ಅಥವಾ ನಂತರ ಸೇವೆಯಿಂದ ನಿವೃತ್ತಿಯಾದಂಥ ಸರ್ಕಾರಿ ನೌಕರನ ಸಂಬಂಧದಲ್ಲಿ, ನಿವೃತ್ತಿ ವೇತನವನ್ನು, ಆತನ ನಿವೃತ್ತಿಯ ಸಮಯದಲ್ಲಿ ಪಡೆಯುತ್ತಿದ್ದ 'ಉಪಲಬ್ಧಿ' ಗಳ ಶೇಕಡ ಐವತ್ತರಷ್ಟಕ್ಕೆ ಲೆಕ್ಕ ಹಾಕತಕ್ಕದ್ದು. ಹಾಗೆ ಲೆಕ್ಕಹಾಕಲಾದ ನಿವೃತ್ತಿ ವೇತನದ ಮೊತ್ತವು 66 ಪೂರ್ಣಗೊಂಡ ಆರು ತಿಂಗಳ ಅವಧಿಗಳ ಗರಿಷ್ಠ ಅರ್ಹತಾದಾಯಕ ಸೇವೆಗೆ ಸಂಬಂಧಿಸಿದ್ದಾಗಿರತಕ್ಕದ್ದು. ಸರ್ಕಾರಿ ನೌಕರನು ತನ್ನ ನಿವೃತ್ತಿಯ ಸಮಯದಲ್ಲಿ, 20 ಪೂರ್ಣಗೊಂಡ ಆರು ತಿಂಗಳ ಅವಧಿಗಳು ಅಥವಾ ಅದಕ್ಕಿಂತ ಹೆಚ್ಚಿನ ಅರ್ಹತಾದಾಯಕ ಸೇವೆ ಸಲ್ಲಿಸಿದ್ದು ಆದರೆ 66 ಪೂರ್ಣಗೊಂಡ ಆರು ತಿಂಗಳ ಅವಧಿಗಳಿಗಿಂತ ಕಡಿಮೆಯಿದ್ದರೆ ಅವನ ನಿವೃತ್ತಿ ವೇತನದ ಮೊತ್ತವು, 66 ಪೂರ್ಣಗೊಂಡ ಆರು ತಿಂಗಳ ಅವಧಿಗಳ ಗರಿಷ್ಠ ಅರ್ಹತಾದಾಯಕ ಸೇವೆಗೆ ಒಳಪಟ್ಟು ಅವನು ಸಲ್ಲಿಸಿದ ಅರ್ಹತಾದಾಯಕ ಸೇವೆ ಎಂದು ಗರಿಷ್ಠ ಅಂಗೀಕಾರಾರ್ಹ ನಿವೃತ್ತಿ ವೇತನದ ಅಂಥ ಪ್ರಮಾಣಾನುಸಾರದಲ್ಲಿರತಕ್ಕದ್ದು.

ಪರಂತು, ದಿನಾಂಕ 01.09.2003 ಮತ್ತು 8.9.2006ರ ಅವಧಿಯಲ್ಲಿ ಸೇವೆಯಲ್ಲಿರುವಾಗಲೇ ನಿವೃತ್ತರಾದ ಅಥವಾ ಮೃತರಾದ ಸರ್ಕಾರಿ ನೌಕರನು 22.10.2007ರಿಂದ ಮಾತ್ರವೇ ಆರ್ಥಿಕ ಸೌಲಭ್ಯಗಳಿಗೆ ಅರ್ಹನಾಗಿರತಕ್ಕದ್ದು"

**9. 293ಎಫ್ ಹೊಸ ನಿಯಮದ ಸೇರ್ಪಡೆ.-** ಸದರಿ ನಿಯಮಗಳ 293-ಇ ನಿಯಮದ ತರುವಾಯ ಈ ಮುಂದಿನ ಹೊಸ ನಿಯಮವನ್ನು 2005ರ ಜುಲೈ, ಮೊದಲನೇ ದಿನದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"293ಎಫ್.- (1)ಅರ್ಹತಾ ಸೇವೆಯನ್ನು ಹತ್ತು ಆರು ತಿಂಗಳ ಅವಧಿಗಳಿಗಿಂತ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿದ ಸರ್ಕಾರಿ ನೌಕರನ ಪ್ರಕರಣದಲ್ಲಿ, ಈ ನಿಯಮಗಳ ಮೇರೆಗೆ ಸಂದಾಯ ಮಾಡಬೇಕಾದ ನಿವೃತ್ತಿ ಉಪದಾನದ ಮೊತ್ತವು, ಉಪಲಬ್ಧಿಗಳ ಗರಿಷ್ಠ 16 1/2 ಯಷ್ಟಕ್ಕೆ ಒಳಪಟ್ಟು, ಅರ್ಹತಾದಾಯಕ ಸೇವೆಯ ಪ್ರತಿ ಪೂರ್ಣಗೊಂಡ ಆರು ತಿಂಗಳ ಅವಧಿಗಾಗಿನ ಉಪಲಬ್ಧಿಗಳ 1/4ರಷ್ಟಕ್ಕೆ ಸಮನಾಗಿರತಕ್ಕದ್ದು. ಹಾಗಾಗಿ, ಲೆಕ್ಕಹಾಕಲಾದ ನಿವೃತ್ತಿ ಉಪದಾನದ ಮೊತ್ತವು ಗರಿಷ್ಠ ಮೂರು ಲಕ್ಷ ರೂ.ಗಳಿಗೆ ಒಳಪಟ್ಟಿರತಕ್ಕದ್ದು.

(2) ಸರ್ಕಾರಿ ನೌಕರನ ಮರಣದ ಸಂದರ್ಭದಲ್ಲಿ, ಈ ನಿಯಮಗಳ ಮೇರೆಗೆ ಅನ್ವಯಿಸುವ ಮರಣದ ಉಪದಾನವು, ಈ ಮುಂದಿನ ದರಗಳಲ್ಲಿರತಕ್ಕದ್ದು, ಎಂದರೆ:-

| | **ಅಹಾತಾದಾಯಕ ಸೇವೆಯ ಅವಧಿ** | **ಉಪದಾನದ ದರ** |
|---|---|---|
| (1) | ಒಂದು ವರ್ಷಕ್ಕಿಂತ ಕಡಿಮೆ | ಉಪಲಬ್ಧಿಗಳ ಎರಡರಷ್ಟು |
| (2) | ಒಂದು ವರ್ಷ ಅಥವಾ ಹೆಚ್ಚು ಆದರೆ ಐದು ವರ್ಷಗಳಿಗಿಂತ ಕಡಿಮೆ | ಉಪಲಬ್ಧಿಗಳ ಆರರಷ್ಟು |
| (3) | ಐದು ವರ್ಷಗಳು ಅಥವಾ ಹೆಚ್ಚು ಆದರೆ 20 ವರ್ಷಗಳಿಗಿಂತ ಕಡಿಮೆ | ಉಪಲಬ್ಧಿಗಳ ಹನ್ನೆರಡರಷ್ಟು |

| | | |
|---|---|---|
| (4) | 20 ವರ್ಷಗಳು ಅಥವಾ ಹೆಚ್ಚು | ಉಪಲಬ್ಧಿಗಳ ಗರಿಷ್ಠ 33ಕ್ಕೆ ಒಳಪಟ್ಟು ಅರ್ಹತಾದಾಯಕ ಸೇವೆಯ ಪ್ರತಿ ಪೂರ್ಣಗೊಂಡ ಆರು ತಿಂಗಳ ಅವಧಿಗೆ ಉಪಲಬ್ಧಿಗಳ ಅರ್ಧ. ಪರಂತು, ಮರಣದ ಉಪದಾನವು ಯಾವುದೇ ಸಂದರ್ಭದಲ್ಲಿ 3.00 ಲಕ್ಷ ರೂ.ಗಳನ್ನು ಮೀರತಕ್ಕದ್ದಲ್ಲ. |

**ವಿವರಣೆ:** ವಿವಿಧ ನಿವೃತ್ತಿ ಹಾಗೂ ಮರಣದ ಸೌಲಭ್ಯಗಳು ಮತ್ತು ಕುಟುಂಬ ವೇತನವನ್ನು ಲೆಕ್ಕಹಾಕುವ ಉದ್ದೇಶಕ್ಕಾಗಿ "ಉಪಲಬ್ಧಿ"ಗಳೆಂದರೆ, ಸರ್ಕಾರಿ ನೌಕರನು, ತನ್ನ ನಿವೃತ್ತಿ ಅಥವಾ ಮರಣದ ದಿನಾಂಕದಂದು ತಾನು ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ಮೂಲ ವೇತನ ಮತ್ತು ಈ ಕೆಳಕಂಡವುಗಳನ್ನು ಸಹ ಒಳಗೊಳ್ಳುತ್ತದೆ:

(ಎ) ಗರಿಷ್ಠ ವೇತನ ಶ್ರೇಣಿಗಿಂತ ಹೆಚ್ಚಿಗೆ ಆತನಿಗೆ ಯಾವುದೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿದ್ದರೆ ಆ ಸ್ಥಗಿತ ವೇತನ ಬಡ್ತಿ;

(ಬಿ) ಕರ್ನಾಟಕ ಸಿವಿಲ್ ಸೇವೆಗಳ (ಪರಿಷ್ಕೃತ ವೇತನ) ನಿಯಮಗಳು, 2007ರ 7ನೇ ನಿಯಮದ (3)ನೇ ಉಪ ನಿಯಮದ ಮೇರೆಗೆ ಆತನಿಗೆ ಯಾವುದೇ ವೈಯಕ್ತಿಕ ವೇತನವನ್ನು ಮಂಜೂರು ಮಾಡಿದ್ದರೆ ಆ ವೈಯಕ್ತಿಕ ವೇತನ ಮತ್ತು

(ಸಿ) ಸರ್ಕಾರಿ ಆದೇಶ ಸಂ. ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ 9ನೇ ಮೇ 2002ರ ಪ್ರಕಾರವಾಗಿ ಗರಿಷ್ಠ ಕಾಲಿಕ ವೇತನ ಶ್ರೇಣಿಯನ್ನು ಮೀರಿದಾಗ ಮಂಜೂರಾದ ಹೆಚ್ಚುವರಿ ವೇತನ ಬಡ್ತಿ;"

**10. 297–ಇ ನಿಯಮದ ಸೇರ್ಪಡೆ.–** ಸದರಿ ನಿಯಮಗಳ 297–ಡಿ ನಿಯಮದ ನಂತರ, ಈ ಮುಂದಿನ ಹೊಸ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"297–ಡಿ ಸರ್ಕಾರಿ ನೌಕರನು 2005ರ ಜುಲೈ 1 ರಂದು ಅಥವಾ ನಂತರ ಸೇವೆಯಲ್ಲಿರುವಾಗಲೇ ನಿವೃತ್ತಿ ಅಥವಾ ಮರಣ ಹೊಂದಿದ ಸಂಬಂಧದಲ್ಲಿ, ಕನಿಷ್ಠ ನಿವೃತ್ತಿ ವೇತನವು ತಿಂಗಳಿಗೆ 2,250/– ರೂ.ಗಳಾಗಿರತಕ್ಕದ್ದು ಮತ್ತು ಗರಿಷ್ಠ ನಿವೃತ್ತಿ ವೇತನವು ಈ ಮುಂದಿನ ನಿವೃತ್ತಿ ವೇತನದ ವರ್ಗಗಳ ಸಂಬಂಧದಲ್ಲಿ ತಿಂಗಳಿಗೆ ರೂ.ಗಳು 19,950/– ಆಗಿರತಕ್ಕದ್ದು ಎಂದರೆ:–

(i) ವಯೋ ನಿವೃತ್ತಿ ವೇತನ;

(ii) ನಿವೃತ್ತಿ ವೇತನ;

(iii) ಅಸಿಂಧು ನಿವೃತ್ತಿ ವೇತನ;

(iv) ಪರಿಹಾರ ನಿವೃತ್ತಿ ವೇತನ;

(v) ಅನುಕಂಪ ಭತ್ಯೆ;

ಪರಂತು, ಸರ್ಕಾರಿ ನೌಕರನು 01.7.2005 ಮತ್ತು 31.3.2006ರ ಅವಧಿಯಲ್ಲಿ ಸೇವೆಯಲ್ಲಿರುವಾಗಲೇ ನಿವೃತ್ತಿ ಹೊಂದಿದ ಅಥವಾ ಮರಣ ಹೊಂದಿದ ಪ್ರಕರಣದಲ್ಲಿ, ಮೇಲಿನ ಸೌಲಭ್ಯವು ಕಾಲ್ಪನಿಕವಾಗಿರತಕ್ಕದ್ದೆ ಹೊರತು ಹಣಕಾಸಿನ ಸೌಲಭ್ಯ ಹೊಂದಿರತಕ್ಕದ್ದಲ್ಲ."

**11.451ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 451ನೇ ನಿಯಮದಲ್ಲಿ, (1)ರಿಂದ (4)ನೇ ಉಪ–ನಿಯಮಗಳಿಗೆ ಬದಲಾಗಿ ಈ ಮುಂದಿನದನ್ನು 2008ರ ಆಗಸ್ಟ್, ಮೊದಲನೇ ದಿನದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

"(1) ಪ್ರಯಾಣ ಭತ್ಯೆಯ ಉದ್ದೇಶಕ್ಕಾಗಿ, ಸರ್ಕಾರಿ ನೌಕರರನ್ನು ವೇತನದ ಆಧಾರದ ಮೇಲೆ ಈ ಮುಂದಿನ ಪ್ರವರ್ಗಗಳಾಗಿ ವರ್ಗೀಕರಿಸತಕ್ಕದ್ದು, ಎಂದರೆ:–

| ಪ್ರವರ್ಗ | ವೇತನ ಶ್ರೇಣಿ (ಪ್ರತೀ ತಿಂಗಳಿಗೆ) |
|---|---|
| I | ರೂ. 17,250/– ಮತ್ತು ಅದಕ್ಕಿಂತ ಹೆಚ್ಚು |
| II | ರೂ. 11,100/– ರಿಂದ ರೂ. 17,249/– |
| III | ರೂ. 8,000/– ದಿಂದ ರೂ. 11,099/– |
| IV | ರೂ. 8,000/– ಕ್ಕಿಂತ ಕಡಿಮೆ |

(2) ಸರ್ಕಾರಿ ನೌಕರನು, ತಾವು ಸೇರಿದಂತ ಪ್ರವರ್ಗಗಳಿಗೆ ಅನ್ವಯಿಸಬಹುದಾದಂಥ ಈ ಮುಂದಿನ ದರಗಳಲ್ಲಿ ರಾಜ್ಯದೊಳಗೆ ವಾಸ್ತವ್ಯ ಹೂಡಿದ್ದಕ್ಕಾಗಿ ಮತ್ತು ರಾಜ್ಯದ ಹೊರಗಡೆ ವಾಸ್ತವ್ಯ ಹೂಡಿದ್ದಕ್ಕಾಗಿ ದಿನ ಭತ್ಯಕ್ಕೆ ಹಕ್ಕುಳ್ಳವರಾಗಿರತಕ್ಕದ್ದು ಎಂದರೆ:–

| ಸರ್ಕಾರಿ ನೌಕರನು ಸೇರಿದ ಪ್ರವರ್ಗ | ರಾಜ್ಯದ ಒಳಗೆ ತಂಗುವುದು | | | ರಾಜ್ಯದ ಹೊರಗೆ ತಂಗುವುದು | |
|---|---|---|---|---|---|
| | ಬೆಂಗಳೂರು | ಮುನಿಸಿಪಲ್ ಕಾರ್ಪೋರೇಷನ್ ನಲ್ಲಿರುವ ಪ್ರದೇಶಗಳು | ಇತರೇ ಸ್ಥಳಗಳು | ಅಹಮದಾಬಾದ್, ಮುಂಬೈ, ಕೊಲ್ಕತ್ತ ದೆಹಲಿ, ಘಾಜಿಯಾಬಾದ್, ಹೈದರಾಬಾದ್, ಕಾನ್ಪೂರ, ಚೆನ್ನೈ, ಮುಸ್ಸೂರಿ, ಪುನಾ, ಶಿಮ್ಲಾ, ನಾಗಪೂರ್, ಶ್ರೀನಗರ, ಗೋವಾ, ಡಿಯು ಮತ್ತು ದಾಮನ್ | ಇತರೇ ಸ್ಥಳಗಳು |
| 1 | 2 | 3 | 4 | 5 | 6 |
| I | ರೂ.225 | ರೂ.190 | ರೂ.150 | ರೂ.270 | ರೂ.225 |
| II | ರೂ.165 | ರೂ.130 | ರೂ.110 | ರೂ.225 | ರೂ.165 |
| III | ರೂ.130 | ರೂ.110 | ರೂ.90 | ರೂ.190 | ರೂ.110 |
| IV | ರೂ.90 | ರೂ.85 | ರೂ.75 | ರೂ.130 | ರೂ.90 |

(3) ರಾಜ್ಯದ ಹೊರಗೆ ಮಾಡುವ ಪ್ರವಾಸದ ಮೇಲಿನ ಪ್ರಯಾಣಗಳ ಸಂಬಂಧದಲ್ಲಿ ತಂಗುವಿಕೆಗಾಗಿ ದಿನಭತ್ಯೆಯ ವಿಶೇಷ ದರಗಳು, ಅನುಸೂಚಿ ದರಪಟ್ಟಿಯಲ್ಲಿ ಯಾವುದೇ ಹೋಟೆಲ್ ಅಥವಾ ಇತರೇ ನೋಂದಾಯಿತ ಸಂಸ್ಥೆಯಲ್ಲಿ ಊಟ ಮತ್ತು ವಸತಿಯನ್ನು ಒದಗಿಸುವುದು ಈ ಮುಂದಿನ ದರಗಳಲ್ಲಿರತಕ್ಕದ್ದು, ಎಂದರೆ:–

| ಸರ್ಕಾರಿ ನೌಕರನು ಸೇರಿದ ಪ್ರವರ್ಗ | ಅಹಮದಾಬಾದ್, ಮುಂಬೈ, ಕೊಲ್ಕತ್ತ ದೆಹಲಿ, ಘಾಜಿಯಾಬಾದ್, ಹೈದರಾಬಾದ್, ಕಾನ್ಪೂರ, ಚೆನ್ನೈ, ಮುಸ್ಸೂರಿ, ಪುನಾ, ಶಿಮ್ಲಾ, ನಾಗಪೂರ್, ಶ್ರೀನಗರ, ಗೋವಾ, ಡಿಯು ಮತ್ತು ದಾಮನ್ | ಇತರೇ ಸ್ಥಳಗಳಲ್ಲಿ ತಂಗುವುದು |
|---|---|---|
| (1) | (2) | (3) |
| I | ರೂ.500 | ರೂ.400 |
| II | ರೂ.400 | ರೂ.300 |
| III | ರೂ.300 | ರೂ.250 |
| IV | ರೂ.220 | ರೂ.200 |

(4) ಕೆಳಗಿನ ಕೋಷ್ಠಕದ ಅಂಕಣ(1)ರಲ್ಲಿ ನಿರ್ದಿಷ್ಟಪಡಿಸಿದ ಪ್ರವರ್ಗಗಳಿಗೆ ಸೇರಿದ ಸರ್ಕಾರಿ ನೌಕರರಿಗೆ ಅರ್ಹವಾದ ವಿಮಾನ/ರೈಲ್ವೆ/ಸಮುದ್ರ, ರಸ್ತೆ ಮೈಲುಗಳು ಮುಂತಾದವು, ಇದೇ ಕೋಷ್ಠಕದ ಅಂಕಣ (2)ರಿಂದ (8)ರಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಇರತಕ್ಕದ್ದು:–

**ಕೋಷ್ಟಕ**

| ಪ್ರವರ್ಗ | ವಿಮಾನಯಾನ ಇಂಡಿಯನ್ ಏರ್‌ಲೈನ್ಸ್ ವಾಯುದೂತ್ ದಲ್ಲಿ ಮಿತವ್ಯಯ ದರ್ಜೆಯಲ್ಲಿ ಮಾತ್ರ | ರೈಲ್ವೆ ಸ್ಥಳಾವಕಾಶ | ಸಮುದ್ರ ಅಥವಾ ನದಿ ಸ್ಟೀಮರ್ ಮೂಲಕ ಪ್ರಯಾಣ ಸ್ಥಳಾವಕಾಶ | ಟ್ಯಾಕ್ಸಿ ಅಥವಾ ಸ್ವಂತ ಕಾರಿನ ಮೂಲಕ | ಮೋಟಾರು ವಾಹನ/ಸ್ಕೂಟರ್/ ಟಾಂಗಾ / ಸೈಕಲ್ ರಿಕ್ಷಾ / ಮಾನವ ಎಳೆಯುವ ರಿಕ್ಷಾದ ಮೂಲಕ | ಆಟೋ ರಿಕ್ಷಾ | ಬೈಸಿಕಲ್ / ಕಾಲುನಡಗೆ |
|---|---|---|---|---|---|---|---|
| *(1)* | *(2)* | *(3)* | *(4)* | *(5)* | *(6)* | *(7)* | *(8)* |
| 1(ಎ) | ರಾಜ್ಯದ ಹೊರಗೆ ಮಾತ್ರ | ಶತಾಬ್ದಿ ಎಕ್ಸ್‌ಪ್ರೆಸ್‌ನಲ್ಲಿ ಎಕ್ಸಿಕ್ಯೂಟಿವ್ ದರ್ಜೆ ಮತ್ತು ಇತರೆ ರೈಲು ಗಳಲ್ಲಿ ಎ.ಸಿ. 1ನೇ ದರ್ಜೆ | ಅತ್ಯುನ್ನತ ದರ್ಜೆ | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ ಪಡಿಸಿದ ದರ | ಪ್ರತಿ ಕಿ.ಮಿ. 1.00 | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ ಪಡಿಸಿದ ದರ | ಪ್ರತಿ ಕಿ.ಮೀ.0.30 |
| 1(ಬಿ) | ಹೈದರಾಬಾದ್ ಮೂಲಕ ಬೀದರ್ / ಬೆಂಗಳೂರಿನಿಂದ ಗುಲ್ಬರ್ಗಾ ಮತ್ತು ಪ್ರತಿಯಾಗಿ ಪ್ರಯಾಣ ಹೊರತುಪಡಿಸಿ ರಾಜ್ಯದೊಳಗೆ ಮಾತ್ರ | ಶತಾಬ್ದಿ ಎಕ್ಸ್‌ಪ್ರೆಸ್‌ನಲ್ಲಿ ಎ.ಸಿ. ಚೇರ್‌ಕಾರ್ ಇತರೆ ರೈಲುಗಳಲ್ಲಿ ಎ.ಸಿ.2 ಟೈರ್. | ಉತ್ತಮ ದರ್ಜೆ | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿಪಡಿಸಿದ ದರ | ಪ್ರತಿ ಕಿ.ಮೀ.1.00 | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ ಪಡಿಸಿದ ದರ | ಪ್ರತಿ ಕಿ.ಮೀ.0.30 |
| II | | ಎ.ಸಿ. ಚೇರ್‌ಕಾರ್/ಪ್ರಥಮ ದರ್ಜೆ /ಎಸಿ 3 ಟೈಯರ್ | ಸ್ಟಿಮರ್‌ನಲ್ಲಿ ಎರಡು ದರ್ಜೆಗಳಿದ್ದರೆ, ಉತ್ತಮ ದರ್ಜೆ ಮತ್ತು ಎರಡು ದರ್ಜೆಗಿಂತ ಹೆಚ್ಚಾಗಿದ್ದರೆ | ಸಾರಿಗೆ ಆಯುಕ್ತರು ಕಾಲಕಾಲಕ್ಕೆ | ಪ್ರತಿ ಕಿ.ಮೀ.1.00 | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ | ಪ್ರತಿ ಕಿ.ಮೀ.0.30 |

| ಪ್ರವರ್ಗ | ವಿಮಾನಯಾನ ಇಂಡಿಯನ್ ಏರ್‌ಲೈನ್ಸ್ ವಾಯುದೂತ್ ದಲ್ಲಿ ಮಿತವ್ಯಯ ದರ್ಜೆಯಲ್ಲಿ ಮಾತ್ರ | ರೈಲ್ವೆ ಸ್ಥಳಾವಕಾಶ | ಸಮುದ್ರ ಅಥವಾ ನದಿ ಸ್ಟೀಮರ್ ಮೂಲಕ ಪ್ರಯಾಣ ಸ್ಥಳಾವಕಾಶ | ಟ್ಯಾಕ್ಸಿ ಅಥವಾ ಸ್ವಂತ ಕಾರಿನ ಮೂಲಕ | ಮೋಟಾರು ವಾಹನ/ಸ್ಕೂಟರ್/ ಟಾಂಗಾ / ಸೈಕಲ್ ರಿಕ್ಷಾ / ಮಾನವ ಎಳೆಯುವ ರಿಕ್ಷಾದ ಮೂಲಕ | ಆಟೋ ರಿಕ್ಷಾ | ಬೈಸಿಕಲ್ / ಕಾಲುನಡಗೆ |
|---|---|---|---|---|---|---|---|
| *(1)* | *(2)* | *(3)* | *(4)* | *(5)* | *(6)* | *(7)* | *(8)* |
| | | | ಮಧ್ಯಮ ಮತ್ತು ದ್ವಿತೀಯ ದರ್ಜೆ | ನಿಗದಿಪಡಿಸಿದ ದರ | | ಪಡಿಸಿದ ದರ | |
| III | | ಎ.ಸಿ. ಚೇರ್‌ಕಾರ್/ಪ್ರಥಮ ದರ್ಜೆ ಎಸಿ 3 ಟೈಯರ್ | ಎರಡು ದರ್ಜೆಗಳಿದ್ದರೆ ಕಡಿಮೆ ದರ್ಜೆ ಮೂರು ದರ್ಜೆಗಳಿದ್ದರೆ ಮಧ್ಯಮ ಅಥವಾ ದ್ವಿತೀಯ ದರ್ಜೆ ನಾಲ್ಕು ದರ್ಜೆಗಳಿದ್ದರೆ, ಮೂರನೇ ದರ್ಜೆ. | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿಪಡಿಸಿದ ದರ | ಪ್ರತಿ ಕಿ.ಮೀ.1.00 | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ ಪಡಿಸಿದ ದರ | ಪ್ರತಿ ಕಿ.ಮೀ.0.30 |
| IV | | ಶತಾಬ್ದಿ ಮತ್ತು ರಾಜಧಾನಿ ಎಕ್ಸ್‌ಪ್ರೆಸ್‌ನಲ್ಲಿ ಎ.ಸಿ. ಚೇರ್ ಕಾರ್ ಮತ್ತು ಇತರೆ ರೈಲು ಗಳಲ್ಲಿ ಸ್ಲೀಪರ್ ದರ್ಜೆ | ಅತಿ ಕಡಿಮೆ ದರ್ಜೆ | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿಪಡಿಸಿದ ದರ | ಪ್ರತಿ ಕಿ.ಮೀ.1.00 | ಸಾರಿಗೆ ಆಯುಕ್ತರು ಕಾಲಕಾಲಕ್ಕೆ ನಿಗದಿ ಪಡಿಸಿದ ದರ | ಪ್ರತಿ ಕಿ.ಮೀ.0.30 |

**ಸೂಚನೆ :** ಸಾರಿಗೆ ಆಯುಕ್ತರು, ರಾಜ್ಯದ ಹೊರಗೆ ವಾಹನದ ಯಾವುದೇ ದರ್ಜೆಗಾಗಿ ದರಗಳನ್ನು ನಿಗದಿಪಡಿಸಿಲ್ಲದಿರುವಾಗ, ರಾಜ್ಯದೊಳಗೆ ಅವರು ನಿಗದಿಪಡಿಸಿದ ದರವು, 463ನೇ ನಿಯಮಕ್ಕೆ ಒಳಪಟ್ಟು ರಾಜ್ಯದ ಹೊರಗೆ ವಾಹನದ ಅಂಥದೇ ದರ್ಜೆಗಳ ಸಂಬಂಧದಲ್ಲಿ ಅನ್ವಯಿಸತಕ್ಕದು.

**12. 462ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 462ನೇ ನಿಯಮದಲ್ಲಿ,–

(i) ಸೂಚನೆ 4ರಲ್ಲಿ "ರೂ.9,060/–" ಅಕ್ಷರಗಳು ಮತ್ತು ಅಂಕಿಗಳು ಬದಲಾಗಿ "ರೂ.17,250/–" ಅಕ್ಷರಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(ii) ಸೂಚನೆ 10 ರಲ್ಲಿ, "ರೂ.9,060/–" ಅಕ್ಷರಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.17,250"/– ಅಕ್ಷರಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**13. 463ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 463ನೇ ನಿಯಮದಲ್ಲಿ, ಸೂಚನೆ 3 ರಲ್ಲಿ, "ಪ್ರತಿ ಮಾರ್ಗಕ್ಕೆ ರೂ.ಗಳು 3/– ಗರಿಷ್ಠಕ್ಕೆ ಒಳಪಟ್ಟು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**14. 487ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 487ನೇ ನಿಯಮದಲ್ಲಿ,–

(1) ಉಪ–ನಿಯಮ (೧) (ಎ) ರಲ್ಲಿ, "ರೂ.10,620"/– ಎಂಬ ಅಕ್ಷರಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.ಗಳು 20,025/–" ಎಂಬ ಅಕ್ಷರಗಳು ಮತ್ತು ಅಂಕಿಗಳನ್ನು 2008, ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು;

(2) 1,2 ಮತ್ತು 3ರ ವಿನಾಯಿತಿಯಲ್ಲಿ "ರೂ.ಗಳು 9,060" ಎಂಬ ಅಕ್ಷರಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.ಗಳು 17,250/–" ಎಂಬ ಅಕ್ಷರಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**15. 489ಎ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 489ಎ ನಿಯಮದ, ಉಪ–ನಿಯಮ (2)ರಲ್ಲಿ, "ಒಂದು ನೂರು ಮತ್ತು ಇಪ್ಪತ್ತು ರೂಪಾಯಿಗಳ ಗರಿಷ್ಠಕ್ಕೊಳಪಟ್ಟು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**16. 497ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 497ನೇ ನಿಯಮದ (ಇ) ಖಂಡದ ಉಪಖಂಡ (1) ಬಾಬು (ii) ರಲ್ಲಿ, "ರೂ. 10,100"/– ಅಕ್ಷರಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.17,250/–" ಎಂಬ ಅಕ್ಷರಗಳು ಮತ್ತು ಅಂಕಿಗಳನ್ನು, 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**17. 525ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 525ನೇ ನಿಯಮದಲ್ಲಿ, "ರೂ.ಗಳು 3,550"/– ಎಂಬ ಅಕ್ಷರಗಳು ಮತ್ತು ಅಂಕಿಗಳಿಗೆ ಬದಲಾಗಿ, "ರೂ.ಗಳು 6800/–" ಎಂಬ ಅಕ್ಷರಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**18. 532ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 532ನೇ ನಿಯಮದಲ್ಲಿ,–

(1) "I ರೈಲು ಮೂಲಕ ಪ್ರಯಾಣ" ಶೀರ್ಷಿಕೆಯ ಅಡಿಯಲ್ಲಿ

(ಎ) (3) (ಎ) ಬಾಬುವಿನಲ್ಲಿ, ಕೋಷ್ಟಕದ ಬದಲಾಗಿ, ಈ ಮುಂದಿನದನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಕಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

**"ಕೋಷ್ಟಕ**

| ಪ್ರವರ್ಗ | ಕೀಲೋಗ್ರಾಂಗಳು |
|---|---|
| I | 5000 |
| II | 3000 |
| III | 2000 |
| IV | 2000" |

(ಬಿ) 3(ಬಿ) ಬಾಬಿನಲ್ಲಿ, "ರೂ.ಗಳು 9.060/–" ಎಂಬ ಪದಗಳು ಮತ್ತು ಅಂಕಿಗಳಿಗೆ ಬದಲಾಗಿ "ರೂ.ಗಳು 17,250/–" ಎಂಬ ಅಕ್ಷರಗಳು ಮತ್ತು ಅಂಕಿಗಳನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(ಸಿ) ಸೂಚನೆ 4ರ ಪರಂತುಕದಲ್ಲಿ ಖಂಡ (3)ಕ್ಕೆ ಬದಲಾಗಿ ಈ ಮುಂದಿನದನ್ನು 2008ರ ಆಗಸ್ಟ್ ಮೊದಲನೇ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸತಕ್ಕದ್ದೆಂದು ಭಾವಿಸತಕ್ಕದ್ದು; ಎಂದರೆ:–

"(3) ಸಾಗಾಣಿಕೆಯನ್ನು ವಾಸ್ತವವಾಗಿ ರೈಲು ಅಥವಾ ಇತರೇ ವಾಹನದ ಮೂಲಕ ಮಾಡಿದ್ದರೆ, ಅವನು ಈ ಮುಂದಿನ ವೇತನ ಶ್ರೇಣಿಗಳಲ್ಲಿ ಮಾಲೀಕರುಗಳ ಹೊಣೆಯಿರುವ ಸಾಗಾಣಿಕೆಗಳಲ್ಲಿ ಸಾಗಿಸಲಾದ ವಾಸ್ತವಿಕ ವೆಚ್ಚವನ್ನು ಪಡೆಯಬಹುದು, ಎಂದರೆ:–

| ವೇತನ ಶ್ರೇಣಿ | ಅನುಮತಿಸಿದ ವಾಹನ |
|---|---|
| ರೂ.19,050/– ಅಥವಾ ಹೆಚ್ಚು | ಮೋಟಾರು ಕಾರು ಅಥವಾ ಮೋಟಾರು ಸೈಕಲ್ |
| ರೂ.8,400/– ಅಥವಾ ಹೆಚ್ಚು ಆದರೆ ರೂ.19,050/– ಕ್ಕಿಂತ ಕಡಿಮೆ | ಮೋಟಾರು ಸೈಕಲ್/ಸ್ಕೂಟರ್/ಮೊಪೆಡ್ ಅಥವಾ ಸೈಕಲ್ |
| ರೂ.8,400/– ಕ್ಕಿಂತ ಕಡಿಮೆ | ಸೈಕಲ್" |

(2) "II ರಸ್ತೆ ಮೂಲಕ ಪ್ರಯಾಣಕ್ಕಾಗಿ" ಶೀರ್ಷಿಕೆ ಅಡಿಯ, ಬಾಬು (iii) ರಲ್ಲಿ, ಕೋಷ್ಠಕಕ್ಕೆ ಬದಲಾಗಿ ಈ ಮುಂದಿನ ಕೋಷ್ಠಕವನ್ನು, 2008ರ ಆಗಸ್ಟ್ ಮೊದಲನೆ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

**"ಕೋಷ್ಟಕ**

| ಪ್ರವರ್ಗ | ಪರಿಷ್ಕೃತ ದರಗಳು (ಪ್ರತಿ ಕಿ.ಮೀ) |
|---|---|
| I | 15–00 |
| II | 10–00 |
| III | 7–50 |
| IV | 5–00" |

**19. 539ಎ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 539ಎ ನಿಯಮದಲ್ಲಿ, ಉಪ–ನಿಯಮ (1)ರ ಬದಲಾಗಿ, ಈ ಮುಂದಿನದನ್ನು 2008ರ ಆಗಸ್ಟ್, ಮೊದಲನೆ ದಿನದಿಂದ ಜಾರಿಗೊಳಿಸಿ ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(1) ಕೇಂದ್ರ ಸ್ಥಾನಗಳನ್ನು ಒಳಗೊಂಡಂತೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ, ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆಯ ಸರ್ಕಾರಿ ನೌಕರನಿಗೆ ಅಂಗೀಕಾರಾರ್ಹವಾದ ವರ್ಗಾವಣೆ ಅನುದಾನದ ದರಗಳು, ಈ ಕೆಳಗೆ ನಿರ್ದಿಷ್ಟ ಪಡಿಸಲಾದಂತೆ ಇರತಕ್ಕದ್ದು, ಎಂದರೆ:–

| ಪ್ರವರ್ಗ | ಜಿಲ್ಲೆಯೊಳಗೆ ವರ್ಗಾವಣೆ | ಜಿಲ್ಲೆಯ ಹೊರಗೆ ವರ್ಗಾವಣೆ |
|---|---|---|
| I | ರೂ.ಗಳು 2500 | ರೂ.ಗಳು 4000 |
| II | ರೂ.ಗಳು 2500 | ರೂ.ಗಳು 4000 |
| III | ರೂ.ಗಳು 1000 | ರೂ.ಗಳು 2000 |
| IV | ರೂ.ಗಳು 1000 | ರೂ.ಗಳು 2000" |

**20. 549ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 549ನೇ ನಿಯಮದಲ್ಲಿ, ಉಪ ನಿಯಮ (17)ರ ತರುವಾಯ, ಈ ಮುಂದಿನದನ್ನು 2008ರ ಆಗಸ್ಟ್ 1ನೇ ದಿನಾಂಕದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"ರೂ.ಗಳು 19,050 ಅಥವಾ ಅದಕ್ಕೂ ಹೆಚ್ಚಿನ ವೇತನ ಪಡೆಯುತ್ತಿರುವ ಸರ್ಕಾರಿ ನೌಕರನು ತನ್ನ ಸ್ವಂತ ಕಾರಿನಲ್ಲಿ ಎಂದರೆ ತನ್ನ ಹೆಸರಿನಲ್ಲಿ ನೋಂದಾಯಿತವಾದ ಕಾರಿನಲ್ಲಿ ಸ್ವಗ್ರಾಮ ಪ್ರಯಾಣ ರಿಯಾಯಿತಿ ಯೋಜನೆ ಮೇರೆಗೆ ರೈಲ್ವೆ ಮೂಲಕ ಸಂಪರ್ಕವಿರುವ ಸ್ಥಳಗಳ ನಡುವೆ ಸ್ವಗ್ರಾಮ ಪ್ರಯಾಣಕ್ಕಾಗಿ ಸಕ್ಷಮ ಪ್ರಾಧಿಕಾರಿಯಿಂದ ನಿರ್ದಿಷ್ಟ ಅಥವಾ ಪೂರ್ವಾನುಮೋದನೆ ಪಡೆದುಕೊಂಡ ಮೇಲೆ ಪ್ರಯಾಣ ಕೈಗೊಳ್ಳಬಹುದು ಹಾಗೂ (ಎ) ಅವನ ಮತ್ತು ಅವನ ಕುಟುಂಬದ ಸದಸ್ಯರಿಗೆ ಪ್ರಥಮ ದರ್ಜೆ ರೈಲು ದರ ಅಥವಾ (ಬಿ) ಅವನ ಕುಟುಂಬದ ಸದಸ್ಯರ ಸಂಖ್ಯೆ ಎಷ್ಟೇ ಇರಲಿ, ಅತಿ ಹತ್ತಿರದ ಮಾರ್ಗದ ಮೂಲಕ 451ನೇ ನಿಯಮದ ಉಪ–ನಿಯಮ (4)ರ ಮೇರೆಗೆ ನಿಯಮಿಸಿದ ದರದಲ್ಲಿ ಒಂದು ಕಡೆಯ ಮೈಲುದರ ಇದರಲ್ಲಿ ಯಾವುದು ಕಡಿಮೆಯೋ ಆ ದರವನ್ನು ಕ್ಲೇಮು ಮಾಡಬಹುದು".

**21. ನಿಯಮ 550ರ ತಿದ್ದುಪಡಿ:–** ಸದರಿ ನಿಯಮಗಳ 550 ನಿಯಮದಲ್ಲಿ ಉಪ ನಿಯಮ (7)ರ ಅಡಿಯಲ್ಲಿ "I ರೈಲು ಮಾರ್ಗದ ಪ್ರಯಾಣ, II ರಸ್ತೆ ಪ್ರಮಾಣ ಮತ್ತು III ಸಮುದ್ರ ಪ್ರಯಾಣ" ಶೀರ್ಷಿಕೆಗಳಲ್ಲಿ ರೂ.10620 ಮತ್ತು ರೂ.4150 ಅಕ್ಷರಗಳು ಮತ್ತು ಅಂಕಿಗಳು ಎಲ್ಲಿ ಎಲ್ಲಿ ನಮೂದಾಗಿದೆಯೋ ಅದರ ಬದಲಿಗೆ "ರೂ.20025 ಮತ್ತು ರೂ.8000" ಎಂಬ ಅಕ್ಷರಗಳು ಮತ್ತು ಅಂಕೆಗಳನ್ನು 2008ರ ಆಗಸ್ಟ್ ಮೊದಲನೆ ದಿನದಿಂದ ಪ್ರತ್ಯಾಯೋಜಿಸತಕ್ಕದೆಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–1)

***FINANCE SECRETARIAT***

***NOTIFICATION***

***No. FD 3 SRA 2009, Bangalore, Dated: 24th August, 2010***

The draft of the following rules further to amend the Karnataka Civil Services Rules, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Finance Department, Vidhana Soudha, Bangalore-560 001.

***DRAFT RULES***

***1. Title and commencement.-*** (1) These rules may be called the Karnataka Civil Services ( Amendment) Rules, 2010.

(2) They shall come into force from the date of their publication in the Official Gazette.

***2. Amendment of rule 8.-*** In rule 8 of the Karnataka Civil Services Rules (hereinafter referred to as the said rules), after clause (10), the following shall be inserted, namely:-

"(11) "class or Group of services" means the class or Group of Civil Services as classified in rule 5 of the Karnataka Civil Services (Classification Control and appeal) Rules, 1957".

***3. Amendment of rule 32.-*** In rule 32 of the said rules for Note 3, the following shall be deemed to have been substituted, with effect from the first day of August, 2008, namely:-

***"Note 3:-*** The Authority competent to make incharge arrangements specified in column(1) of the table below, may make incharge arrangements for vacant posts in respect of subordinate Government servants holding the posts in the classes or group of posts specified in column(2) thereof to the maximum duration specified therein.

***TABLE***

| ***Authority competent to make incharge arrangement*** | ***Posts belonging to Class or Group of Services*** | | |
|---|---|---|---|
| ***(1)*** | ***(2)*** | | |
| | ***Group A Services*** | ***Group B Services*** | ***Group C and D Services*** |
| Heads of Departments | 4 months | 6 months | Full powers |
| Divisional level officers | 3 months | 4 months | Full powers |
| District Level officers | 2 months | 3 months | Full powers |
| Sub divisional officers | - | 2 months | Full powers |
| Taluk level officers | - | - | Full powers" |

***4. Amendment of rule 68.***- In rule 68 of the said rules:-

(1) for the words “not exceeding five percent of the pay of the office (minimum pay of posts)” the words letters and figures “at the rate of five percent of the minimum of the scale of the post held subject to a maximum of Rs.1000,” shall be deemed to have been inserted with effect from first day of August, 2008.

(2) For Note 8, the following Note shall be deemed to have been substituted with effect from first day of August, 2008.

“Note 8:- The Authority competent to make incharge arrangements specified in column(1) of the table below, may make incharge arrangements for vacant posts in respect of the sub-ordinate Government servants holding the posts class or Group of Services specified in column(2) thereof to the maximum duration specified therein.

***TABLE***

| ***Authority competent to make incharge arrangement*** | ***Class Or Group of Services*** | | |
|---|---|---|---|
| ***(1)*** | ***(2)*** | | |
| | ***Group A Services*** | ***Group B Services*** | ***Group C and D Services*** |
| Heads of Departments | 4 months | 6 months | Full powers |
| Divisional level officers | 3 months | 4 months | Full powers |
| District Level officers | 2 months | 3 months | Full powers |
| Sub divisional officers | - | 2 months | Full powers |
| Taluk level officers | - | - | Full powers” |

***5. Amendment of rule 192.***-In rule 192 of the said rules, for clause (d) excluding Notes 1 to 6, following shall be substituted, namely:-

“(d) The Authority competent to sanction leave other than special disability leave specified in column(1) of the table below, may sanction leave other than special disability leave in respect of subordinate Government servants holding the posts in the class or Group of Services specified in column(2) thereof to the maximum duration specified therein.

***Table***

| ***Authority competent to sanction leave other than special disability leave*** | ***Class Or Group of Services*** | | |
|---|---|---|---|
| ***(1)*** | ***(2)*** | | |
| | ***Group A Services*** | ***Group B Services*** | ***Group C and D Services*** |
| Heads of Departments | 4 months | 6 months | Full powers |
| Divisional level officers | 3 months | 4 months | Full powers |
| District Level officers | 2 months | 3 months | Full powers |
| Sub divisional officers | - | 2 months | Full powers |
| Taluk level officers | - | - | Full powers" |

***6. Amendment of rule 210.-*** In rule 210, of the said rules for the letter and figures "Rs.1,055" the letters and figures "Rs.2,250" shall be deemed to have been substituted, with effect from first day of August, 2008.

***7. Amendment of rule 222.-*** In rule 222 of the said rules,-

(i) for the figures and words "15 years" appearing in the proviso to the said rule the figures and words "10 years" shall be deemed to have been substituted with effect from first day of September, 2003.

(ii) after the proviso the following proviso shall be inserted, namely:-

"Provided further that Government servants retired between 01.09.2003 and 08.09.2006 shall be eligible for notional fixation but not for any arrears upto 22nd October, 2007."

***8. Insertion of new rule 291 G.-*** After rule 291-F of the said rules the following new rule shall be deemed to have been inserted with effect from the 1st day of September, 2003, namely:-

"***291(G).-*** In respect of Government Servant who retire from Service on or after Ist day of September 2003 Pension shall be calculated at fifty percent of 'emoluments' drawn by him at the time of his retirement. The amount of pension so arrived at shall be related to the maximum qualifying service of 66 completed six monthly periods. For a Government Servant who, at the time of his retirement, renders a qualifying service of 20 completed six monthly periods or more but less than 66 completed six monthly periods the amount of his pension shall be in such proportion of the maximum admissible pension, as the qualifying service rendered by him, is to the maximum qualifying service of 66 completed six monthly periods.

Provided that the Government servant retired or died while in service between date of 01.09.2003 and 08.09.2006 shall be eligible for financial benefits only from 22.10.2007".

***9. Insertion of new rule 293 F.-***After rule 293-E of the said rules, the following new rule shall be deemed to have been inserted with effect from 1st day of July 2005, namely:-.,

***"293 F.-*** (1) In the case of a Government servant who has completed not less than ten six monthly period of qualifying service the amount of retirement gratuity payable under these rules shall be equal to 1/4th of the emoluments for each completed six monthly period of qualifying service, subject to a maximum of 16 ½ times of the emoluments. The amount of retirement gratuity thus calculated shall be subject to maximum of rupees three lakhs.

(2) In the event of the death of a Government servant the death gratuity admissible under these rules shall be at the following rates, namely:-

| ***Length of qualifying service*** | ***Rate of gratuity*** |
|---|---|
| (1) Less than one year | Two times emoluments |
| (2) One year or more but less than 5 years | Six times of emoluments |
| (3) Five years or more but less than 20 years | Twelve times of emoluments |
| (4) 20 years or more | Half of emoluments for every completed six monthly period of qualifying service subject to maximum of 33 times of emoluments provided that the amount of death gratuity shall in no case exceed Rs.3.00 lakhs. |

***Explanation:-*** The term "emoluments" for purpose of calculating various retirement and death benefits and family pension shall mean the basic pay drawn by a Government Servant in the scale of pay applicable to the post held by him on the date of retirement or death and also include,-

(a) Stagnation increment, if any, granted to him above the maximum of the scale of pay;

(b) Personal pay, if any, granted to him under sub-rule(3) of rule 7 of the Karnataka Civil Services (Revised Pay) Rules, 2007; and

(c) Additional increment granted beyond the maximum of the time scale of pay in terms of Government Order No.FD 13 SRP 2002 dated 9th May, 2002".

***10. Insertion of rule 297-E.-*** After rule 297-D of the said rules, the following new rule shall be inserted, namely:-

"297D.- In respect of retirement or death of a Government Servant while in service on or after 1st day of July, 2005, the minimum pension shall be Rs.2,250/- per month and the maximum pension shall be Rs.19,950/- per month in respect of following kinds of pension, namely:-

(i) Superannuation Pension;

(ii) Retiring Pension;

iii) Invalid Pension;

(iv) Compensation Pension;

(v) Compassionate Allowance.

Provided that in case of the Government servant retired or died while in service between 01.07.2005 and 31.03.2006 the above benefit shall be notional and but not monetary."

***11. Amendment of rule 451.-*** In rule 451 of the said rules, for sub-rules (1) to (4), the following shall be deemed to have been substituted with effect from first day of August, 2008, namely:-

"(1) For the purpose of Traveling Allowance, Government servants shall be classified into the following categories based on pay, namely:-

| ***Category*** | ***Pay range (per month)*** |
|---|---|
| I | Rs.17,250/- and above |
| II | Rs.11,100/- to Rs.17,249/- |
| III | Rs.8,000/- to Rs.11,099/- |
| IV | Below Rs.8,000/- |

(2) A Government Servant shall be entitled to daily allowance for halts within the State and halts outside the State at the following rates as admissible for the category to which they belong, namely:-

| Category to which Govt. servant belongs | Halts within the State | | | Halts outside the State | |
|---|---|---|---|---|---|
| | Bangalore | Places with Municipal Corporations | Other Places | Ahmedabad, Mumbai, Kolkata, Delhi, Ghaziabad, Hyderabad, Kanpur, Chennai, Mussori, Pune, Simla,Ngapur Srinagar, Goa, Diu and Daman | Other places |
| (1) | (2) | (3) | (4) | (5) | (6) |
| I | Rs.225 | Rs.190 | Rs.150 | Rs.270 | Rs.225 |
| II | Rs.165 | Rs.130 | Rs.110 | Rs.225 | Rs.165 |
| III | Rs.130 | Rs.110 | Rs.90 | Rs.190 | Rs.110 |
| IV | Rs.90 | Rs.85 | Rs.75 | Rs.130 | Rs.90 |

(3) Special rates of daily allowance for halts in respect of journeys on tour outside the State, in a Hotel or other registered establishment providing boarding and lodging at schedule tariff shall be at following rates, namely:-

| Category to which Govt. servant belongs | Halt at Ahmedabad, Mumbai, Kolkata, Delhi, Ghaziabad, Hyderabad, Chennai, Kanpur, Nagpur, Mussori, Pune, Simla, Srinagar, Goa, Diu and Daman | Halt at other places |
|---|---|---|
| (1) | (2) | (3) |
| I | Rs.500 | Rs.400 |
| II | Rs.400 | Rs.300 |
| III | Rs.300 | Rs.250 |
| IV | Rs.220 | Rs.200 |

(4) Air/Railway/Sea/Road Mileage etc., admissible to a Government Servant belonging to the categories specified in column(1) of the Table below shall be at the rates specified in Column(2) to (8) there of:-

***TABLE***

| Cate gory | By Air in Economy only class through IndianAirlines, Vayudoot only | Railway accommo dation | Accomm odation for journey by Sea or River Steamer | By full Taxi or Own car | By Motor Cycle/ Scooter/ Tanga/ Cycle Rikshaw /Man driven Rikshaw | Auto Rikshaw | Bicycle / Foot |
|---|---|---|---|---|---|---|---|
| (1) | (2) | (3) | (4) | (5) | (6) | (7) | (8) |
| I(a) | Outside State only | Executive class in Shatabdi Express and A.C 1st Class in other trains | Highest Class | Rate fixed by trans port commi ssioner from time to time | Rs.1.00 Per KM | Rate fixed by Transport commission er from time to time | 0.30 Per KM |
| I(b) | Within the State only except to travel via Hyderabad to Bidar/ Bangalore to Gulbarga and Vice versa | AC Chair car in Shatabdi Express and A.C 2 tier in other trains | Higher Class | Rate fixed by transport commi ssioner from time to time | Rs.1.00 Per KM | Rate fixed by Transport commission er from time to time | 0.30 Per KM |

| Category | By Air in Economy only class through IndianAirlines, Vayudoot only | Railway accommodation | Accommodation for journey by Sea or River Steamer | By full Taxi or Own car | By Motor Cycle/ Scooter/ Tanga/ Cycle Rikshaw /Man driven Rikshaw | Auto Rikshaw | Bicycle / Foot |
|---|---|---|---|---|---|---|---|
| (1) | (2) | (3) | (4) | (5) | (6) | (7) | (8) |
| II | | AC Chair car/First Class/AC 3 tier | If there be two classes on the steamer Higher Class and if there be more than two classes Middle and Second Class | Rate fixed by transport commissioner from time to time | Rs.1.00 Per KM | Rate fixed by Transport commissioner from time to time | 0.30 Per KM |
| III | | AC Chair car/First Class/AC 3 tier | If there be two classes Lower class. If there be three classes or Middle or Second Class. If there be four classes Third Class | Rate fixed by transport commissioner from time to time | Rs.1.00 Per KM | Rate fixed by Transport commissioner from time to time | 0.30 Per KM |
| IV | | AC Chair car in Shatabdi and Rajdhani Express and sleeper class in other trains | Lowest Class | Rate fixed by transport commissioner from time to time | Rs.1.00 Per KM | Rate fixed by Transport commissioner from time to time | 0.30 Per KM |

***Note:-*** Where the Transport Commissioner has not fixed rates for any class of vehicle out side the state, the rate fixed by him within the state shall be applicable in respect of such class of vehicle out side the state subject to rule 463."

***12. Amendment of rule 462.-*** In rule 462 of the said rules,-

(i) In Note 4, for the letters and figures "Rs.9,060" the letters and figures "Rs.17,250" shall be deemed to have been substituted with effect from first day of August, 2008.

(ii) In Note 10, for the letters and figures "Rs.9,060" the letters and figures "Rs.17,250" shall be deemed to have been substituted with effect from first day of August, 2008.

***13. Amendment of rule 463.-*** In rule 463 of the said rules, in note 3, the words "subject to a maximum of Rs. 3 each way" shall be omitted.

***14. Amendment of rule 487.-*** In rule 487 of the said rules,-

(1) In sub-rule (i)(a), for the letters and figures "Rs.10,620", the letters and figures "Rs.20,025" shall be deemed to have been substituted with effect from the first day of August, 2008;

(2) In exception 1,2 and 3 for the letters and figures "Rs.9,060" the letters and figures "Rs.17,250" shall be deemed to have been substituted with effect from the first day of August, 2008.

***15. Amendment of rule 489 A.-*** In rule 489 A of the said rules, in sub rule (2) the words "subject to a maximum of one hundred and twenty rupees" shall be omitted.

***16. Amendment of rule 497.-***In rule 497, of the said rules in clause (e), item (ii) in sub clause (1) for the letters and figures "Rs.10,100" the letters and figures "Rs.17,250" shall be deemed to have been substituted with effect from the first day August, 2008.

***17. Amendment of rule 525.***-In rule 525 of the said rules, for the letters and figure "Rs.3,550" the letters and figures "Rs.6800" shall be deemed to have been substituted with effect from the first day of August, 2008.

***18. Amendment of rule 532.***-In rule 532 of the said rules,-

(1) under the heading " I Journey by Rail".

(a) in item(3)(a), for the table the following shall be deemed to have been substituted with effect from first day of August, 2008 namely:-

Table

| Category | Kilograms |
|---|---|
| I | 5000 |
| II | 3000 |
| III | 2000 |
| IV | 2000 |

(b) in item 3(b) for the words and figures "Rs.9,060" the letters and figures "Rs.17,250" shall be deemed to have been substituted with effect from the first day of August, 2008.

(c) in the proviso to Note 4 for clause (3) the following shall be deemed to have been substituted with effect from the first day of August, 2008, namely:-

"(3) conveyance are actually carried by rail or other craft, he may draw the actual cost of transporting at owners risk conveyances on the following scales, namely:-

| ***PAY RANGE*** | ***VEHICLE ALLOWED*** |
|---|---|
| Rs. 19,050/- or above | A Motor Car or a Motor Cycle |
| Rs.8,400/- or above but below Rs.19,050/- | A Motor Cycle/Scooter/Moped or a Cycle |
| Below Rs.8,400/- | A Cycle |

"

(2) under the heading "II for a Journey by road", in item (iii), for the Table, the following table shall be deemed to have been substituted with effect from the first day of August, 2008, namely:-

*Table*

| Category | ***Revised Rates (Per Km.)*** |
|---|---|
| I | 15-00 |
| II | 10-00 |
| III | 7-50 |
| IV | 5-00" |

***19. Amendment of rule 539 A.***-In rule 539 A of the said rules, for sub-rule (1), the following shall be substituted with effect from the first day of August, 2008, namely:-.

